ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 02ನೇ ಮಾರ್ಚ್, 2020

ಪ್ರೌಢ ಶಾಲೆಗಳ ಅರ್ಹ ಸಹ ಶಿಕ್ಷಕರಿಗೆ ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರ ಹುದ್ದೆಗೆ ಬಡ್ತಿ ನೀಡುವ ಬಗ್ಗೆ

ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ):-

35 (100) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಮತ್ತು ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಪ್ರೌಢ ಶಾಲೆಯಲ್ಲಿನ ಅರ್ಹ ಸಹ ಶಿಕ್ಷಕರಿಗೆ ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರ ಹುದ್ದೆಗಳಿಗೆ ಮುಂಬಡ್ತಿ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ವೃಂದ ಬಲದ ಆಧಾರದಲ್ಲಿ ಶೇಕಡ 25 ರಷ್ಟು ಮುಂಬಡ್ತಿ ನೀಡಲಾಗಿದೆಯೇ;

(ಇ) ನೀಡಿದ್ದಲ್ಲಿ, ವಿಷಯವಾರು ಕಾರ್ಯನಿರ್ವಹಿಸುತ್ತಿರುವ ಉಪನ್ಯಾಸಕರ ವಿವರ ನೀಡುವುದು;

(ಈ) ಈ ವೃಂದ ಬಲದ ಆಧಾರದಲ್ಲಿ ಮುಂಬಡ್ತಿ ಪಡೆದ ಪ್ರೌಢಶಾಲಾ ಶಿಕ್ಷಕರು ಹಾಲಿ ಕಾರ್ಯನಿರ್ವಹಿಸುತ್ತಿರುವವರ ವಿಷಯವಾರು ವಿವರ ನೀಡುವುದು;

(ಉ) ಮುಂಬಡ್ತಿ ನೀಡುವುದು ಬಾಕಿ ಇದ್ದಲ್ಲಿ ಯಾವ ಕಾಲಮಿತಿಯಲ್ಲಿ ವೃಂದ ಬಲದ ಆಧಾರದಲ್ಲಿ ಕೊರತೆ ಇರುವ ಉಪನ್ಯಾಸಕರ ಹುದ್ದೆಗಳಿಗೆ ಮುಂಬಡ್ತಿ ನೀಡಲಾಗುವುದು?